# ಕರ್ನಾಟಕ ವಿಧಾನಸಭೆ

| | | | |
|---|---|---|---|
| 1 | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 216 |
| 2 | ಸದಸ್ಯರ ಹೆಸರು | : | ಡಾ|| ಅಂಜಲಿ ಹೇಮಂತ್ ನಿಂಬಾಳ್ಕರ್ (ಖಾನಾಪುರ) |
| 3 | ಉತ್ತರಿಸುವ ದಿನಾಂಕ | : | 21.09.2022 |
| 4 | ಉತ್ತರಿಸುವ ಸಚಿವರು | : | ಮಾನ್ಯ ತೋಟಗಾರಿಕೆ ಹಾಗೂ ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವರು. |

*****

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಶಾಸಕರ ಸ್ಥಳೀಯ ಪ್ರದೇಶಾಭಿವೃದ್ಧಿ ಅನುದಾನದಡಿ ಪ್ರತಿ ವರ್ಷಕ್ಕೆ ನಿಗಧಿಪಡಿಸಿದ ರೂ.2.00 ಕೋಟಿಗಳ ಪೈಕಿ 2018-19, 2019-20 ಮತ್ತು 2020-21ನೇ ಸಾಲಿನಲ್ಲಿ ಅನುದಾನ ಬಿಡುಗಡೆಯಾಗದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು ಬಂದಿದೆ.<br><br>ಕರ್ನಾಟಕ ಶಾಸಕರ ಸ್ಥಳೀಯ ಪ್ರದೇಶಾಭಿವೃದ್ಧಿ ಯೋಜನೆಯಡಿ 2018-19ನೇ ಸಾಲಿನಲ್ಲಿ ಪ್ರತೀ ಕ್ಷೇತ್ರಕ್ಕೆ ತಲಾ ರೂ.2.00 ಕೋಟಿಗಳನ್ನು ಬಿಡುಗಡೆ ಮಾಡಲಾಗಿದೆ. (ಬಂಡವಾಳ ವೆಚ್ಚದಡಿ ಬಿಡುಗಡೆಗೆ ಬಾಕಿಯಿದ್ದ ನಾಲ್ಕನೇ ಕಂತಿನ ಅನುದಾನವನ್ನು ಸರ್ಕಾರಿ ಆದೇಶ ಸಂಖ್ಯೆ:ಪಿಡಿಎಸ್ 144 ಕೆಎಲ್ಎಸ್ 2021, ದಿನಾಂಕ:11.03.2022 ರಂದು ಬಿಡುಗಡೆಗೊಳಿಸಲಾಗಿರುತ್ತದೆ).<br><br>2019-20ನೇ ಸಾಲಿನಲ್ಲಿ ಮೊದಲನೇ ಕಂತಿನ ಅನುದಾನ ರೂ.150.00 ಕೋಟಿಗಳನ್ನು ಬಿಡುಗಡೆಗೊಳಿಸಲಾಗಿದೆ ಹಾಗೂ ಮೂರು ಮತ್ತು ನಾಲ್ಕನೇ ಕಂತಿನ ಅನುದಾನವನ್ನು ರೂ.300.00 ಕೋಟಿಗಳನ್ನು 2020-21ನೇ ಸಾಲಿನಿಂದ ವರ್ಗಾಯಿಸಿ ನೀಡಲಾಗಿದೆ. ಉಳಿದ ಎರಡನೇ ಕಂತಿನ ಅನುದಾನ ಬಂಡವಾಳ ವೆಚ್ಚದಡಿ ರೂ.106.46 ಕೋಟಿಗಳು ಬಿಡುಗಡೆಗೆ ಬಾಕಿಯಿರುತ್ತದೆ. ಸದರಿ ಅನುದಾನವನ್ನು ಜಿಲ್ಲಾಧಿಕಾರಿಗಳ ಪಿಡಿ ಖಾತೆಯಲ್ಲಿರುವ ರೂ.545.30 ಕೋಟಿಗಳು ಲಭ್ಯವಿದ್ದು, ಲಭ್ಯವಿರುವ ಅನುದಾನದಲ್ಲಿ ಶೇಕಡ 75 ರಷ್ಟು ವೆಚ್ಚ ಭರಿಸಿದ ನಂತರ ಬಿಡುಗಡೆಗೆ ಕ್ರಮವಹಿಸಲಾಗುವುದು.<br><br>2020-21ನೇ ಸಾಲಿನಲ್ಲಿ ಕೋವಿಡ್-19ರ ಕಾರಣದಿಂದ ರೂ.2.00 ಕೋಟಿಗಳ ಬದಲಾಗಿ ರೂ.1.00 ಕೋಟಿಗಳಿಗೆ ಅನುದಾನವನ್ನು ಮಿತಿಗೊಳಿಸಲಾಗಿದೆ. |
| (ಆ) | ಅಗತ್ಯ ಸಿಬ್ಬಂದಿ ಕೊರತೆಯಿಂದ ಸದರಿ ಅನುದಾನದಡಿ ಶಿಫಾರಸ್ಸು ಮಾಡಲಾದ ಕಾಮಗಾರಿಗಳಿಗೆ ಮಂಜೂರಾತಿ ನೀಡುವ ಅಂದಾಜು ಪಟ್ಟಿ ತಯಾರಿಸಿ ತಾಂತ್ರಿಕ ಮಂಜೂರಾತಿ, ಆಡಳಿತ ಮಂಜೂರಾತಿ ಮುಂತಾದ ಪ್ರಕ್ರಿಯೆಗಳನ್ನು ತ್ವರಿತಗೊಳಿಸಲು ಸರ್ಕಾರವು ಯಾವ ಕ್ರಮ ಜರುಗಿಸಿದೆ? | ಕರ್ನಾಟಕ ಶಾಸಕರ ಸ್ಥಳೀಯ ಪ್ರದೇಶಾಭಿವೃದ್ಧಿ ಯೋಜನೆಯ ಅನುದಾನವನ್ನು ಅನುಷ್ಠಾನಗೊಳಿಸಲು, ಜಿಲ್ಲಾಧಿಕಾರಿಗಳಿಗೆ ಕೆಲಸದ ಒತ್ತಡ ಹೆಚ್ಚಾಗಿರುವುದರಿಂದ ಸದರಿ ಯೋಜನೆಯನ್ನು ಮಾನ್ಯ ಶಾಸಕರ ಪ್ರಸ್ತಾವನೆಯನ್ವಯ ಉಪವಿಭಾಗಾಧಿಕಾರಿಗಳಿಗೆ ವರ್ಗಾಯಿಸಲಾಗಿದೆ ಹಾಗೂ ರೂ.5.00 ಲಕ್ಷಗಳ ಕಾಮಗಾರಿಗಳನ್ನು ಕಾರ್ಯಪಾಲಕ ಅಭಿಯಂತರರ ಬದಲಾಗಿ ಸಹಾಯಕ ಕಾರ್ಯಪಾಲಕ ಅಭಿಯಂತರ ಹಂತದಲ್ಲಿಯೇ ತಾಂತ್ರಿಕ ಪರಿಶೀಲನೆ ಮತ್ತು ಆಡಳಿತಾತ್ಮಕ ಮಂಜೂರಾತಿ ನೀಡುವ ಅಧಿಕಾರವನ್ನು ಪ್ರತ್ಯಾಯೋಜಿಸಲಾಗಿದೆ. ಕಡತ ಅನಗತ್ಯ ವಿಳಂಬವಾಗುವುದನ್ನು ತಪ್ಪಿಸಲು ಕರ್ನಾಟಕ ಶಾಸಕರ ಸ್ಥಳೀಯ ಪ್ರದೇಶಾಭಿವೃದ್ಧಿ ಯೋಜನೆಯ ಎಲ್ಲಾ ಪ್ರಕ್ರಿಯೆಗಳನ್ನು ತಂತ್ರಾಂಶದಲ್ಲಿ ಅಳವಡಿಸುವ ಮುಖೇನ ತ್ವರಿತಗೊಳಿಸಲು ಕ್ರಮವಹಿಸಲಾಗಿದೆ. |

ಸಂಖ್ಯೆ: ಪಿಡಿಎಸ್ 81 ಕೆಎಲ್ಎಸ್ 2022.

(ಮುನಿರತ್ನ)
ತೋಟಗಾರಿಕೆ ಹಾಗೂ
ಯೋಜನೆ, ಕಾರ್ಯಕ್ರಮ ಸಂಯೋಜನೆ
ಮತ್ತು ಸಾಂಖ್ಯಿಕ ಇಲಾಖಾ ಸಚಿವರು.

# ಕರ್ನಾಟಕ ವಿಧಾನಸಭೆ

| | | | |
|---|---|---|---|
| 1 | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 524 |
| 2 | ಸದಸ್ಯರ ಹೆಸರು | : | ಶ್ರೀ ಪುಟ್ಟರಂಗಶೆಟ್ಟಿ ಸಿ. (ಚಾಮರಾಜನಗರ) |
| 3 | ಉತ್ತರಿಸುವ ದಿನಾಂಕ | : | 21.09.2022 |
| 4 | ಉತ್ತರಿಸುವ ಸಚಿವರು | : | ಮಾನ್ಯ ತೋಟಗಾರಿಕೆ ಹಾಗೂ ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವರು. |

****

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಶಾಸಕರ ಸ್ಥಳೀಯ ಪ್ರದೇಶಾಭಿವೃದ್ಧಿ ಯೋಜನೆಯಡಿಯಲ್ಲಿ ಚಾಮರಾಜನಗರ ಜಿಲ್ಲೆಗೆ 2021-22ನೇ ಸಾಲಿನಲ್ಲಿ ಬಿಡುಗಡೆಗೊಳಿಸಲಾಗಿರುವ ಅನುದಾನವೆಷ್ಟು; (ವಿವರ ನೀಡುವುದು) | ಕರ್ನಾಟಕ ಶಾಸಕರ ಸ್ಥಳೀಯ ಪ್ರದೇಶಾಭಿವೃದ್ಧಿ ಯೋಜನೆಯಡಿ ಚಾಮರಾಜನಗರ ಜಿಲ್ಲೆಗೆ 2021-22ನೇ ಸಾಲಿನಲ್ಲಿ ಬಿಡುಗಡೆಗೊಳಿಸಲಾಗಿರುವ ಅನುದಾನ ರೂ.800.00 ಲಕ್ಷಗಳು<br>ವಿವರಗಳು ಕೆಳಕಂಡಂತಿದೆ:- |

| ಕ್ರ ಸಂ | ಕ್ಷೇತ್ರ | ಬಿಡುಗಡೆಯಾಗಿರುವ ಅನುದಾನ (ರೂ.ಲಕ್ಷಗಳಲ್ಲಿ) |
|---|---|---|
| 1 | ಚಾಮರಾಜನಗರ | 200.00 |
| 2 | ಗುಂಡ್ಲುಪೇಟೆ | 200.00 |
| 3 | ಕೊಳ್ಳೇಗಾಲ | 200.00 |
| 4 | ಹನೂರು | 200.00 |
| | ಒಟ್ಟು | 800.00 |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| (ಆ) | ಉಳಿಕೆ ಅನುದಾನವನ್ನು ಬಿಡುಗಡೆ ಮಾಡದಿರಲು ಕಾರಣಗಳೇನು; (ಸಂಪೂರ್ಣ ವಿವರ ನೀಡುವುದು) | ಪ್ರತಿ ಕ್ಷೇತ್ರಕ್ಕೆ ತಲಾ ರೂ.2.00 ಕೋಟಿಯಂತೆ ಅನುದಾನ ಬಿಡುಗಡೆಯಾಗಿರುವ ಹಿನ್ನಲೆಯಲ್ಲಿ, ಉಳಿಕೆ ಅನುದಾನವನ್ನು ಬಿಡುಗಡೆ ಮಾಡುವ ಪ್ರಶ್ನೆ ಉದ್ಭವಿಸುವುದಿಲ್ಲ. |
| (ಇ) | ಶಾಸಕರ ಸ್ಥಳೀಯ ಪ್ರದೇಶಾಭಿವೃದ್ಧಿ ಯೋಜನೆಯಡಿ ಬಾಕಿ ಇರುವ ಅನುದಾನ ಬಿಡುಗಡೆ ಮಾಡಲು ಸರ್ಕಾರ ಆಸಕ್ತಿ ಹೊಂದಿದೆಯೇ; ಹಾಗಿದ್ದಲ್ಲಿ, ಯಾವ ಕಾಲಮಿತಿಯಲ್ಲಿ ಅನುದಾನ ಬಿಡುಗಡೆ ಮಾಡಲಾಗುವುದು? (ವಿವರ ನೀಡುವುದು) | ಅನ್ವಯಿಸುವುದಿಲ್ಲ. |

ಸಂಖ್ಯೆ: ಪಿಡಿಎಸ್ 82 ಕೆಎಲ್‌ಎಸ್ 2022

(ಮುನಿರತ್ನ)
ತೋಟಗಾರಿಕೆ ಹಾಗೂ
ಯೋಜನೆ, ಕಾರ್ಯಕ್ರಮ ಸಂಯೋಜನ
ಮತ್ತು ಸಾಂಖ್ಯಿಕ ಇಲಾಖಾ ಸಚಿವರು.